# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 150 (1242) |
| ಸದಸ್ಯರ ಹೆಸರು | : | ಶ್ರೀಮತಿ. ಎಸ್.ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 07.03.2022 |
| ಉತ್ತರಿಸುವವರು | : | ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ತಿತಿಮತಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಚೇಣಿಹಡ್ಲು ಗಿರಿಜನರ ಹಾಡಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಡಾನೆಗಳು ಬಾರದ ರೀತಿಯಲ್ಲಿ ಕೋಟ್ಯಾಂತರ ರೂಪಾಯಿ ವೆಚ್ಚದಲ್ಲಿ ಅಳವಡಿಸಲಾಗುತ್ತಿರುವ ರೈಲ್ವೆ ಬ್ಯಾರಿಕೇಡ್ ಅವೈಜ್ಞಾನಿಕವಾಗಿರುವುದರಿಂದ, ಸ್ಥಳೀಯರಿಂದ ಪ್ರತಿಭಟನೆ ಹಾಗೂ ಪ್ರತಿರೋಧ ಎದುರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಡಗು ಜಿಲ್ಲೆ ತಿತಿಮತಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಆನೆಚೌಕೂರು ವನ್ಯಜೀವಿ ವಲಯದ ಗಡಿ ಭಾಗದಲ್ಲಿ ಮರಪಾಲ ಬ್ರಿಡ್ಜ್‌ನಿಂದ ಚೇಣಿಹಡ್ಲು ಗೇಟ್ ವರೆಗೆ ರೈಲ್ವೆ ಬ್ಯಾರಿಕೇಡ್ ಕಾಮಗಾರಿ ನಿರ್ವಹಿಸಲು ನುರಿತ ತಜ್ಞ ಅಭಿಯಂತರರಿಂದ ಆ ಸ್ಥಳದ ಮಣ್ಣಿನ ಮಾದರಿಗೆ ಅನುಗುಣವಾಗಿ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ತಯಾರಿಸಿ ಕರ್ನಾಟಕ ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ, ಮಂಜೂರಾತಿ ಪಡೆಯಲಾಗಿರುತ್ತದೆ. ಟೆಂಡರ್ ತಾಂತ್ರಿಕ ಹಾಗೂ ಆರ್ಥಿಕ ಬಿಡ್ ನಲ್ಲಿ ವಿಜೇತರಾದ ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿ ಕಾಮಗಾರಿ ಪ್ರಾರಂಭಿಸಲಾಗಿರುತ್ತದೆ. ಆದ್ದರಿಂದ ಕಾಮಗಾರಿಯನ್ನು ಅವೈಜ್ಞಾನಿಕ ರೀತಿಯಲ್ಲಿ ಪ್ರಾರಂಭಿಸಿರುವುದಿಲ್ಲ, ಹಾಗೂ ಕೋಟ್ಯಾಂತರ ರೂಗಳನ್ನು ವೆಚ್ಚ ಮಾಡಿರುವುದಿಲ್ಲ. ಆದಾಗ್ಯೂ ಸ್ಥಳೀಯ ಜನರ ಅಸಹಕಾರದಿಂದಾಗಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಅರಣ್ಯ ಇಲಾಖೆಯು ಈಗಾಗಲೇ ಆನೆ ಕಂದಕ ತೆಗೆದ ಮಾರ್ಗದಲ್ಲಿಯೇ ರೈಲ್ವೆ ಕಂಬಿ ಅಳವಡಿಸದೇ, ಅವೈಜ್ಞಾನಿಕ ರೀತಿಯಲ್ಲಿ ಬೇರೆ ಮಾರ್ಗದಲ್ಲಿ ಕಾಮಗಾರಿಯನ್ನು ಅನುಷ್ಠಾನಗೊಳಿಸುತ್ತಿರುವುದಕ್ಕೆ ಕಾರಣಗಳೇನು; | ಆನೆಚೌಕೂರು ವನ್ಯಜೀವಿ ವಲಯದ ಚೇಣಿಹಡ್ಲು ಮತ್ತು ಆಯಿರ ಹೊಸಹಳ್ಳಿಯ ಹಾಡಿಗಳ ಪಕ್ಕದ ಅರಣ್ಯದ ಗಡಿಯಲ್ಲಿಯೇ ಮರಪಾಲ ಸೇತುವೆಯಿಂದ ಕೆ.ಎಂ. ಕೊಲ್ಲಿಯವರೆಗೆ 2.564 ಕಿ.ಮೀ. ಮತ್ತು ಚೇಣಿಹಡ್ಲು ಗೇಟ್ ನಿಂದ ಮರಪಾಲ ಸೇತುವೆವರೆಗೆ 0.845 ಕಿ.ಮೀ. ಉದ್ದಕ್ಕೆ ರೈಲ್ವೆ ಬ್ಯಾರಿಕೇಡ್ ಅನ್ನು ವಿವರವಾದ ಯೋಜನಾ ವರದಿ (ಡಿ.ಪಿ.ಆರ್.) ಪ್ರಕಾರ ನಿರ್ಮಿಸಲು ಯೋಜಿಸಲಾಗಿತ್ತು. ಈ ಎರಡು ಹಾಡಿಗಳ ಸುತ್ತಲೂ ಈಗಾಗಲೇ ಆನೆ ನಿರೋಧಕ ಕಂದಕಗಳನ್ನು ನಿರ್ಮಿಸಲಾಗಿತ್ತು. ರೈಲ್ವೆ ಬ್ಯಾರಿಕೇಡ್ ಮಾಡಲು ಉದ್ದೇಶಿಸಿದ್ದ ಈ ಪ್ರದೇಶದ ಮಾರ್ಗದಲ್ಲಿ ಈಗಾಗಲೇ ನಿರ್ಮಿಸಿದ್ದ ಆನೆ ನಿರೋಧಕ ಕಂದಕಗಳು ಇದ್ದು, ಕೆ.ಎಂ.ಕೊಲ್ಲಿ ಭಾಗದಲ್ಲಿ 2.564 ಕಿ.ಮೀ. ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಕಾಮಗಾರಿ ಪೈಕಿ 0.250 ಕಿ.ಮೀ. ಕಾಮಗಾರಿ ಪೂರ್ಣಗೊಂಡ ನಂತರ ಚೇಣಿಹಡ್ಲು ಹಾಗೂ ಆಯಿರ ಹೊಸಹಳ್ಳಿಯ ಗಿರಿಜನರಿಂದ ಪ್ರತಿಭಟಣೆ ಉಂಟಾಗಿರುತ್ತದೆ. ಆದಕಾರಣ ಈ ಹಂತದಲ್ಲಿ ಕಾಮಗಾರಿಯನ್ನು ಸ್ಥಗಿತಗೊಳಿಸಬೇಕಾಗಿರುತ್ತದೆ. |
| ಇ) | ರೈಲ್ವೆ ಬ್ಯಾರಿಕೇಡ್ ಅನ್ನು ಅವೈಜ್ಞಾನಿಕ ರೀತಿಯಲ್ಲಿ ಅಳವಡಿಸುತ್ತಿರುವುದರಿಂದ, ಚೇಣಿಹಡ್ಲು ಗಿರಿಜನರ ಹಾಡಿಯ ಜನರು ಹಲವಾರು ತೊಂದರೆಗಳಿಗೆ ಸಿಲುಕುವುದರಿಂದ, ಅದನ್ನು ಕೈಬಿಟ್ಟು ಸ್ಥಳೀಯರ ಬೇಡಿಯಂತೆ, ಅರಣ್ಯ ಇಲಾಖೆಯು ಈಗಾಗಲೇ ಆನೆ ಕಂದಕ ತೆಗೆದ ಮಾರ್ಗದಲ್ಲಿಯೇ ರೈಲ್ವೆ ಕಂಬಿ ಅಳವಡಿಸಲು ಕೂಡಲೇ ಕ್ರಮ ಕೈಗೊಳ್ಳಲಾಗುವುದು? | |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಮುಂದುವರೆದು, ಚೀಣಿಹಡ್ಲು ಗೇಟ್ ನಿಂದ ಮರಪಾಲ ಸೇತುವೆವರೆಗೆ ಅರಣ್ಯ ಪ್ರದೇಶದ ಸುತ್ತಲೂ ಆನೆಗಳು ಅರಣ್ಯ ಪ್ರದೇಶದಿಂದ ಹೊರಬರದಂತೆ ತಡೆಯಲು ತಯಾರಿಸಲಾದ ಯೋಜನಾ ವರದಿಯನ್ವಯ (ಡಿ.ಪಿ.ಆರ್) 0.845 ಕಿ.ಮೀ. ರೈಲ್ವೆ ಬ್ಯಾರಿಕೇಡ್ ಕಾಮಗಾರಿಯನ್ನು ಅರಣ್ಯ ಗಡಿ ಪ್ರದೇಶದ ಉದ್ದಕ್ಕೂ ನಿರ್ಮಿಸಲು ಉದ್ದೇಶಿಸಲಾಗಿತ್ತು. ಹಾಡಿಯಲ್ಲಿ ವಾಸಿಸುತ್ತಿರುವ ಜನರು ರೈಲ್ವೆ ಬ್ಯಾರಿಕೇಡ್ ಅನ್ನು ಹಾಡಿಯ ಹಿಂಭಾಗದ ಅರಣ್ಯ ಪ್ರದೇಶದೊಳಗೆ ಈಗಾಗಲೇ ಇರುವ ಆನೆ ತಡೆ ಕಂದಕ ನಿರ್ಮಾಣದ ಪ್ರದೇಶದಲ್ಲಿಯೇ ಮಾಡುವಂತೆ ಮತ್ತು ಅರಣ್ಯದ ಗಡಿ ಉದ್ದದ ಪ್ರದೇಶದಲ್ಲಿ ನಿರ್ಮಿಸಬಾರದೆಂದು ಒತ್ತಾಯಿಸಿರುತ್ತಾರೆ.<br><br>ಸ್ಥಳೀಯ ಜನಪ್ರತಿನಿಧಿಗಳು, ಕಾಫಿ ಬೆಳೆಗಾರರು, ರೈತರು ಮತ್ತು ಸಾರ್ವಜನಿಕರು ಹಾಗೂ ಇಲಾಖೆಯ ಅಧಿಕಾರಿಗಳು ಇಲಾಖೆಯು ಕಾಮಗಾರಿಯನ್ನು ಪೂರ್ಣಗೊಳಿಸಲು ಅನುವು ಮಾಡಿಕೊಡುವಂತೆ ಗಿರಿಜನರಿಗೆ ಮನವೊಲಿಸಲು ಪ್ರಯತ್ನಿಸಿರುತ್ತಾರೆ. ಆದಾಗ್ಯೂ, ಹಾಡಿಯ ಗಿರಿಜನರು ಅದನ್ನು ಒಪ್ಪದೇ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಇಲಾಖೆಗೆ ಸಹಕಾರ ನೀಡಿರುವುದಿಲ್ಲ.<br><br>ರೈಲ್ವೆ ಬ್ಯಾರಿಕೇಡ್ ಕಾಮಗಾರಿಯು ಖಾಯಂ/ಶಾಶ್ವತ ನಿರ್ಮಾಣವಾಗಿದ್ದು, ಈ ಕಾಮಗಾರಿಯನ್ನು ಅರಣ್ಯ ಪ್ರದೇಶದ ಗಡಿಯುದ್ದಕ್ಕೂ ನಿರ್ಮಿಸಬೇಕಾಗಿದ್ದು, ಅರಣ್ಯ ಪ್ರದೇಶದ ಒಳಭಾಗದಲ್ಲಲ್ಲ. ಆದಾಗ್ಯೂ ಹಾಡಿಯೊಳಗೆ ಬೆಳೆ ಹಾನಿಯನ್ನು ತಪ್ಪಿಸಲು ಇನ್ನು ಮುಂದೆ ಹಾಡಿಯ ಸುತ್ತಲು ಈಗಾಗಲೇ ಇರುವ ಆನೆ ತಡೆ ಕಂದಕಗಳನ್ನು ಬಲಪಡಿಸಲಾಗುವುದು ಹಾಗೂ ಅವಶ್ಯವಿದ್ದಲ್ಲಿ ಸೌರತಂತಿ ಬೇಲಿಯನ್ನು ನಿರ್ಮಿಸಲಾಗುವುದು. |

**ಸಂಖ್ಯೆ: ಅಪಜೀ 40 ಎಫ್‌ಡಬ್ಲ್ಯೂಎಲ್ 2022**

**(ಉಮೇಶ್ ವಿ. ಕತ್ತಿ)**
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು